

# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | 40 (234) |
| ಮಾನ್ಯ ಸದಸ್ಯರ ಹೆಸರು | ಡಾ:ತಳವಾರ್ ಸಾಬಣ್ಣ (ನಾಮನಿರ್ದೇಶನ ಹೊಂದಿದವರು) |
| ಉತ್ತರಿಸಬೇಕಾದ ದಿನಾಂಕ | 17/02/2022 |
| ಉತ್ತರಿಸುವವರು | ಮಾನ್ಯ ಕಾರ್ಮಿಕ ಸಚಿವರು |

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಸರಕಾರಿ ಸೌಲಭ್ಯ ಪಡೆಯಲು ನಕಲಿ ಕಟ್ಟಡ ಕಾರ್ಮಿಕರು ನೋಂದಣಿಯಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ನಕಲಿ ಕಟ್ಟಡ ಕಾರ್ಮಿಕರು ನೋಂದಾಣಿಯಾಗಿರುವ ಕುರಿತಾದ ದೂರುಗಳು ಸ್ವೀಕೃತವಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿರುತ್ತದೆ.<br><br>ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರನ್ನು ಫಲಾನುಭವಿಗಳಾಗಿ ನೋಂದಣಿ ಮಾಡಲು ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರು (ಉದ್ಯೋಗದ ಕ್ರಮೀಕರಣ ಮತ್ತು ಸೇವಾ ಷರತ್ತುಗಳು) ಕಾಯ್ದೆ, 1996 ರಡಿ ಅವಕಾಶ ಕಲ್ಪಿಸಲಾಗಿದ್ದು, ಸದರಿಕಾಯ್ದೆಯುಲ್ಲಿ ನಿಗಧಿಪಡಿಸಿರುವ ಅರ್ಹತೆ ಮತ್ತು ಮಾನದಂಡಗಳನ್ವಯ ಸೇವಾ ಸಿಂಧು ತಂತ್ರಾಂಶದಲ್ಲಿ ಸಲ್ಲಿಸಲಾಗಿರುವ ಅರ್ಜಿ ಮತ್ತು ದಾಖಲೆಗಳನ್ನು ಪರಿಶೀಲಿಸಿ ನೋಂದಾಣಾಧಿಕಾರಿಗಳಾದ ಹಿರಿಯ ಕಾರ್ಮಿಕ ನಿರೀಕ್ಷಕರು/ ಕಾರ್ಮಿಕ ನಿರೀಕ್ಷಕರು ನೋಂದಣಿ ಮಾಡುತ್ತಿದ್ದಾರೆ. ಅನರ್ಹ ಫಲಾನುಭವಿಗಳಗಾಗಿ ಅರ್ಜಿ ಸಲ್ಲಿಸಿದಲ್ಲಿ ಅವರ ಅರ್ಜಿಯನ್ನು ಸೂಕ್ತ ಕಾರಣಗಳೊಂದಿಗೆ ತಿರಸ್ಕರಿಸಲಾಗುತ್ತಿದೆ.<br><br>ಇದಲ್ಲದೇ, ನಕಲಿ ಕಟ್ಟಡ ಮತ್ತುಇತರೆ ನಿರ್ಮಾಣ ಕಾರ್ಮಿಕರು ನೋಂದಣಿಯಾಗುವುದನ್ನು ತಡೆಗಟ್ಟಲು, ನೋಂದಣಿಗಾಗಿ ಸ್ವೀಕೃತವಾದ ಅರ್ಜಿಗಳನ್ನು ವಿಲೇವಾರಿ ಮಾಡುವಾಗ ಪರಿಶೀಲನೆ ನಡೆಸಿ ಅವಶ್ಯವಿದ್ದಲ್ಲಿ ಸತ್ಯಾಸತ್ಯತೆಯನ್ನು ಖಾತರಿ ಪಡಿಸಿಕೊಳ್ಳಲು ಸ್ಥಳ ತಪಾಸಣೆಕೂಡ ನಡೆಸಿ, ನೋಂದಣಿಗೆ ಕ್ರಮವಹಿಸುವಂತೆ ಹಾಗೂ ನಕಲಿ ಅರ್ಜಿಗಳೆಂದು ಕಂಡು ಬಂದಲ್ಲಿ ಅಂತಹ ಅರ್ಜಿಗಳನ್ನು ತಿರಸ್ಕರಿಸುವಂತೆ ಮಂಡಳಿಯಿಂದ ಈಗಾಗಲೇ ಸುತ್ತೋಲೆಯನ್ನು ಕ್ಷೇತ್ರ ಅಧಿಕಾರಿಗಳಿಗೆ ದಿನಾಂಕ:04-10-2021 ರಂದು ಹೊರಡಿಸಲಾಗಿರುತ್ತದೆ. |

| | | |
|---|---|---|
| | | ಇದಲ್ಲದೇ ಅಸಮರ್ಪಕ ದಾಖಲೆಗಳು ಹಾಗೂ ತಪ್ಪು ಮಾಹಿತಿಯನ್ನು ನೀಡಿ ನೋಂದಾಣಿಯಾಗುವ ಫಲಾನುಭವಿಗಳ ಸದಸ್ಯತ್ವನ್ನುರದ್ದು ಪಡಿಸಲು ನೋಂದಾಣಿಧಿಕಾರಿಗಳ ಅಧಿಕಾರವನ್ನು ನೀಡಿ ಕರ್ನಾಟಕ ನಿಯಮಗಳಲ್ಲಿ ತಿದ್ದುಪಡಿಯನ್ನು ತರಲಾಗುತ್ತಿದೆ.<br>ಮುಂದುವರೆದು, ಜಿಲ್ಲಾ ಮಟ್ಟದಲ್ಲಿ ನೋಂದಣಿಗಳ ಮೇಲೆ ನಿಗವಹಿಸಲು ಹಿರಿಯ ಅಧಿಕಾರಿಗಳಗೊಂಡ ತಂಡವನ್ನು ರಚಿಸಲು ಕ್ರಮ ವಹಿಸಲಾಗುತ್ತಿದೆ. |
| ಆ) | ನಿಜವಾದ ಕಟ್ಟಡ ಕಾರ್ಮಿಕರನ್ನು ಗುರುತಿಸುವಲ್ಲಿ ಇಲಾಖೆಯ ಅಧಿಕಾರಿಗಳು ವಿಫಲರಾಗಿದ್ದಾರೆಯೇ; | ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ನೋಂದಣಿಯು ನಿರಂತರ ಪ್ರಕ್ರಿಯೆಯಾಗಿದ್ದು, ಅರ್ಹ ಕಾರ್ಮಿಕರನ್ನು ಗುರುತಿಸಿ ಅವರನ್ನು ನೋಂದಾಯಿಸಿ, ಮಂಡಳಿಯ ಸೌಲಭ್ಯಗಳನ್ನು ವಿತರಿಸಲು ಇಲಾಖೆಯ ಅಧಿಕಾರಿಗಳು ಕಾಲಕಾಲಕ್ಕೆ ಕೆಲಸದ ಸ್ಥಳಗಳಲ್ಲಿ ನೋಂದಣಿ ಪ್ರಕ್ರಿಯೆ ಮತ್ತು ಸೌಲಭ್ಯಗಳ ಬಗ್ಗೆ ಅರಿವು ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುತ್ತಿದ್ದಾರೆ. ಇದಲ್ಲದೇ ಮಂಡಳಿಯಿಂದ ಕೂಡ ನೋಂದಣಿ ಮತ್ತು ಸೌಲಭ್ಯಗಳ ಬಗ್ಗೆ ಐಇಸಿ ಚಟುವಟಿಕೆಗಳನ್ನು ಕೂಡ ಈ ಕೆಳಕಂಡಂತೆ ಹಮ್ಮಿಕೊಳ್ಳಲಾಗುತ್ತಿದೆ.<br>ಮಾಹಿತಿ, ಶಿಕ್ಷಣ ಮತ್ತು ಸಂವಹನ ಚಟುವಟಿಕೆಗಳಡಿಯಲ್ಲಿ ಬಸ್ ಬ್ರ್ಯಾಂಡಿಂಗ್, ಕೆ.ಎಸ್.ಆರ್.ಟಿ.ಸಿ ಬಸ್ ಸ್ಟ್ಯಾಂಡ್ ಆಡಿಯೋ ಅನೌನ್ಸ್‌ಮೆಂಟ್, ಬಿ.ಎಂ.ಟಿ.ಸಿ ಬಸ್ ಸ್ಟ್ಯಾಂಡ್‌ಗಳಲ್ಲಿ ಎಲ್.ಇ.ಡಿ. ಡಿಸ್ಪ್ಲೇ ಮೂಲಕ ಪ್ರಚಾರ, ಬಿ,ಬಿ,ಎಂ.ಪಿ ವ್ಯಾಪ್ತಿಯ ಬಸ್ ಶೆಲ್ಟರ್‌ಗಳ ಬ್ರ್ಯಾಂಡಿಂಗ್, ತಾಲ್ಲೂಕು ಕೇಂದ್ರಗಳಲ್ಲಿ ಗೋಡೆ ಬರಹದ ಮೂಲಕ ಪ್ರಚಾರ, ಸಾಮಾಜಿಕ ಮಾಧ್ಯಮ ಚಟುವಟಿಕೆ, ಜಿಲ್ಲಾಧಿಕಾರಿಗಳ ಕಛೇರಿ ಹಾಗೂ ಕಾರ್ಮಿಕ ಅಧಿಕಾರಿಗಳ ಕಛೇರಿಗಳಲ್ಲಿ ಸನ್ ಬೋರ್ಡ್ ಅಳವಡಿಕೆ, ಮಂಡಳಿಯ ಅಧೀನದಲ್ಲಿರುವ ಹಾಗೂ ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆಯ ಅಧೀನದಲ್ಲಿರುವ ಹೋರ್ಡಿಂಗ್ ಪ್ಯಾನೆಲ್‌ಗಳಲ್ಲಿ ಹೋರ್ಡಿಂಗ್ ಅಳವಡಿಕೆ, ಬ್ಯಾನರ್ ಅಳವಡಿಕೆ, ಪೋಸ್ಟರ್ಸ್ ಅಳವಡಿಕೆ, ಮಂಡಳಿಯ ಸೌಲಭ್ಯಗಳ ಮಾಹಿತಿಯನ್ನೊಳಗೊಂಡ 2020-21 ಮತ್ತು 2021-2022ನೇ ಸಾಲಿನ ಕ್ಯಾಲೆಂಡರ್‌ಗಳ ಮುದ್ರಣ, ಪಾಂಪ್ಲೆಟ್ಸ್‌ಗಳ ಮುದ್ರಣ, ಪತ್ರಿಕೆಗಳಲ್ಲಿ ಮಾಹಿತಿ ಪ್ರಕಟಣೆ ಮುಂತಾದವುಗಳ ಮೂಲಕ ಪ್ರಚಾರ ಕಾರ್ಯಕ್ರಮ ಹಮ್ಮಿಕೊಳ್ಳಲಾಗಿರುತ್ತದೆ. |

| | | |
|---|---|---|
| ಇ) | ನಕಲಿ ದಾಖಲೆಗಳನ್ನು ಪರಿಶೀಲಿಸಿ ನಿಜವಾದ ಕಟ್ಟಡ ಕಾರ್ಮಿಕರಿಗೆ ಕಲ್ಯಾಣ ಯೋಜನೆಗಳ ಸೌಲಭ್ಯ ನೀಡಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು? (ವಿವರ ನೀಡುವುದು) | ಕಟ್ಟಡ ಕಾರ್ಮಿಕನು ಸೇವಾ ಸಿಂಧು ತಂತ್ರಾಂಶದ ಮೂಲಕ ಮಂಡಳಿಯಿಂದ ದೊರಕುವ ವಿವಿಧ ಸೌಲಭ್ಯಗಳಿಗಾಗಿ ಅರ್ಜಿ ಸಲ್ಲಿಸಿದ್ದಲ್ಲಿ ಸಂಬಂಧಪಟ್ಟ ಕಾರ್ಯವ್ಯಾಪ್ತಿಯ ಕಾರ್ಮಿಕ ನಿರೀಕ್ಷಕರು/ ಹಿರಿಯ ಕಾರ್ಮಿಕ ನಿರೀಕ್ಷಕರುಗಳು ಅವಶ್ಯಕತೆ ಇದ್ದಲ್ಲಿ ಸ್ಥಳ ಪರಿಶೀಲನೆ ನಡೆಸಿ ಅರ್ಜಿಗಳನ್ನು ಪುರಸ್ಕರಿಸಬಹುದು ಅಥವಾ ತಿರಸ್ಕರಿಸಬಹುದು ಎನ್ನುವ ತಮ್ಮ ಷರಾದೊಂದಿಗೆ ಅರ್ಜಿಗಳನ್ನು ಮಂಜೂರಾತಿ ಅಧಿಕಾರಿಗಳಿಗೆ ಕಳುಹಿಸುತ್ತಾರೆ. ಮಂಜೂರಾತಿ ಅಧಿಕಾರಿಗಳು ಅರ್ಹ ಅರ್ಜಿಗಳನ್ನು ಮಾತ್ರ ಅನುಮೋದಿಸಿ, ಅನರ್ಹ ಅಥವಾ ಅಸಮರ್ಪಕ ದಾಖಲೆಗಳನ್ನು ಸಲ್ಲಿಸಿದ ಅರ್ಜಿಗಳನ್ನು ತಿರಸ್ಕರಿಸುತ್ತಾರೆ. |

**ಕಾಇ 62 ಎಲ್ಇಟಿ 2022**

*(ಅರಬೈಲ್ ಶಿವರಾಂ ಹೆಬ್ಬಾರ್)*
*ಕಾರ್ಮಿಕ ಸಚಿವರು*